

# ಒಳಮಾಳಿಗೆಯ ಮೇಲೆ ನೊಣ

ಗಣಿತದ ಕಟ್ಟು ಕತೆ

# ಒಳಮಾಳಿಗೆಯ ಮೇಲೆ ನೊಣ

## ಗಣಿತದ ಕಟ್ಟು ಕತೆ

ಲೇಖಿಕೆಃ ಜ್ಯುಲಿ ಗ್ಲಾಸ್,
ಚಿತ್ರಗಳುಃ ರಿಚರ್ಡ್ ವಾಲ್ಟ್ಝ್

ಕನ್ನಡಕ್ಕೆ ಪ್ರಭಾಕರ ನಾನಾವಟಿ

A Math Myth



By Dr. Julie Glass




ಇದು ಒಂದು ಬಹಳ ಹಿಂದಿನ ಕಾಲದಲ್ಲಿ ಜೀವಿಸಿದ ಒಬ್ಬ ಗಣಿತಜ್ಞನ ಕತೆ. ಆತ ಫ್ರಾನ್ಸದಲ್ಲಿ ಇರುತ್ತಿದ್ದನು. ಆತ ಫ್ರೆಂಚ ನಾಗರಿಕನಿದ್ದರಿಂದ ಆತನ ಹೆಸರು ಕೂಡ ಫ್ರೆಂಚದಲ್ಲಿತ್ತು. ಆತನ ಹೆಸರು ರೆನೆ ದೇಕಾರ್ತ. ಇದು ನಿಮಗೆ ಬಹು ಮೋಜಿನ ಹೆಸರೆಂದೆನ್ನಿಸಬಹುದು. ಆದರೆ ಫ್ರಾನ್ಸದಲ್ಲಿ ಇದು ಬಹು ಸಾಮಾನ್ಯವಾದ ಹೆಸರು.

ರೆನೆ ತತ್ವಜ್ಞನು. ತತ್ವಜ್ಞರು ಯಾವಾಗಲೂ “ಇದು ಹೀಗೆ ಏಕೆ?” ಎಂದು ಪ್ರಶ್ನಿಸುವರು. ರೆನೆ ದೊಡ್ಡ ತತ್ವಜ್ಞ. ಅವನ ಎಷ್ಟೋ ವಿಚಾರಗಳು ಈಗಲೂ ಪ್ರಖ್ಯಾತವಾಗಿವೆ.




ರೆನೆ ದೊಡ್ಡ ತತ್ವಜ್ಞನಿದ್ದರೂ ಅವನಿಗೆ ಒಂದು ಸಮಸ್ಯೆ ಇತ್ತು.

ಅವನು ಯಾವಾಗಲೂ ಗೊಂದಲದಲ್ಲಿ ಸಿಕ್ಕಿಕೊಳ್ಳುತ್ತಿದ್ದನು.



ಚಿಕ್ಕಚಿಕ್ಕ ಸಮಸ್ಯೆಗಳು ದೊಡ್ಡ-ದೊಡ್ಡದಾಗಿ ನಿಂತು ಬಿಡುತ್ತಿದ್ದವು!



ಮೋಜಿನ ಸಂಗತಿ ಎಂದರೆ ಅದು ಸಮಸ್ಯೆ ಎಂಬುದೇ ಅವನಿಗೆ ಕೊನೆ ಬರುವತನಕ ಗೊತ್ತಾಗುತ್ತಿರಲಿಲ್ಲ.

....ಅವನು ಬಹು ಮರುಗೂಳಿ. ವಸ್ತುಗಳನ್ನು ಎಲ್ಲಿಟ್ಟಿದ್ದೇನೆ ಎಂಬುದೇ ಅವನಿಗೆ ನೆನಪು ಇರುತ್ತಿರಲಿಲ್ಲ.



ಆತನ ಟಿಪ್ಪಣಿ ಪುಸ್ತಕ...



ಆತನ ಹ್ಯಾಟು...

ಆಕಾಶದಲ್ಲಿಯ ಗ್ರಹ-ತಾರೆಗಳ ಬಗ್ಗೆ ಇರುವ ಪುಸ್ತಕ...



ಆತನು ಬರೆಯಲು ಉಪಯೋಗಿಸುವ ಮಸಿಯ ಬಾಟಲಿ.....



ಓಹ್! ಇಲ್ಲಿದೆ ಮಸಿಯ ಬಾಟಲಿ....

ಈಗೀಗ ರೆನೆಗೆ ತನಗೆ  ಸಮಸ್ಯೆ ಇದೆ ಎಂಬುದು ತಿಳಿಯತೊಡಗಿತು.



"ಇದೆಲ್ಲ ನಿಲ್ಲಿಸಲೇ ಬೇಕು!"
ಅವನು ತನ್ನಷ್ಟಕ್ಕೆ ತಾನೇ ಅಂದುಕೊಂಡನು. ಅವನು ‘ತಿರುಗಾಡಲು ಹೋದಾಗ ಈ ಸಮಸ್ಯೆಯ ಪರಿಹಾರದ ಬಗ್ಗೆ ಯೋಚಿಸುವ’ ಎಂದು ಹೊರಬಿದ್ದನು.

ಅವನಿಗೆ ತನ್ನ ಕೋಟು, ಹ್ಯಾಟು ಮತ್ತು ಮುಂಬಾಗಿಲನ್ನು ಶೋಧಿಸಲು ಸ್ವಲ್ಪ ವೇಳೆ ಹಿಡಿಯಿತು.

ರೆನೆ ಬ್ರೆಡ್ ಕೊಂಡುಕೊಳ್ಳಲು ತನ್ನ
ದಿನನಿತ್ಯದ ಬೇಕರಿಗೆ ಹೋದನು.

ಆ ಮೇಲೆ ತನ್ನ ಪ್ರೀತಿಯ ಸೀನ್ ನದಿಯ
ದಂಡೆಯ ಮೇಲೆ ಕೂಡಲು ಹೊರಟನು.

ರೆನೆ ಅಲ್ಲಿಗೆ ಹೋಗುವಾಗ ದಾರಿಯಲ್ಲಿ ಬ್ರೆಡ್ ನ್ನು ತಿನ್ನುತ್ತ ಹೋಗುತ್ತಿದ್ದನು. ಆ ಮೇಲೆ ನೀರು ಕುಡಿದನು. ಇನ್ನು ಮುಂದೆ ಮರೆಯಕೂಡದು, ಎಂದು ಆಲೋಚಿಸತೊಡಗಿದನು.

ಕತ್ತಲೆಯಾದರೂ ಅವನ ವಿಚಾರ ಮಾಡುವದು ಮುಂದುವರೆಯಿತು. ತಾನು ಎಲ್ಲಿಗೆ ಹೋಗುತ್ತಿದ್ದೇನೆ ಎಂಬುದೇ ಆತ ಮರೆತನು.

ಸ್ಪ್ಲ್ಯಾಶ್!
ರೆನೆ ಸೀನ್ ನದಿಯ ನೀರಿನಲ್ಲಿಯೇ!



ಅವನನ್ನು ನೀರಿನಲ್ಲಿಂದ ಹೊರತೆಗೆದಾಗ

ಮೈಯೆಲ್ಲ ಒದ್ದೆ, ತಣ್ಣಗೆ ಮತ್ತು ಬ್ರೆಡ್ ನೀರಿನಲ್ಲಿ

ತೊಯ್ದು ಜೌಗಾಗಿತ್ತು



ರೆನೆ ಮನೆಗೆ ಹಿಂದಿರುಗಿದನು. ಮನೆ

ಮುಟ್ಟುವದರಲ್ಲಿ ನೆಗಡಿ, ಕೆಮ್ಮು, ಮೈನಡುಗು.



ಅಂಥದರಲ್ಲಿಯೇ ಆತ ಹಾಸಿಗೆ ಹೊಕ್ಕನು.
ನಿದ್ದೆ ಮಾಡತೊಡಗಿದನು.

ಮರುದಿನ ಎದ್ದಾಗ ರೆನೆಗೆ ಕಸಿವಿಸಿ. ಮೈ ಹುಶಾರಿರಲಿಲ್ಲ. ಆದರೆ ಆತನಿಗೆ ಮುಖ ಒರಿಸಲು ಕರವಸ್ತ್ರವೇ ಸಿಗಲೊಲ್ಲದು.... ಮೈ ಹೊದಿಸಲು ಟಾವೆಲ್ ಕೂಡ...

ಮತ್ತು ಹೊದಿಕೆ ಕೂಡ...

ಬೆಚ್ಚಗೆ ಮಾಡಲೆಂದು ಒಲೆ ಹೊತ್ತಿಸಲು ಮರದ ತುಂಡುಗಳು ಕೂಡ...

ಒದ್ದೆಯಾದ ಬ್ರೆಡ್ ಕೂಡ... ಈಗಾಗಲೇ ಅದು ಒಣಗಿರಬಹುದೆಂದು ಅವನ ತರ್ಕ.

ರೆನೆ ಏನೂ ತೋಚದೆ ಮತ್ತೆ ಹಾಸಿಗೆಯ ಒಳಹೊಕ್ಕನು.

ಗೋಡೆ-ಮಾಳಿಗೆಗಳ ಕಡೆ ನೋಡತೊಡಗಿದನು. ಇಡೀ ಖೋಲಿಯಲ್ಲಿಯ ಕೇವಲ ಮಾಳಿಗೆ ದುರವಸ್ಥೆಯಲ್ಲಿರಲಿಲ್ಲ.

ರೆನೆಗೆ ಆಗ ಈ ಹೊಲಸು ನೆಲಕ್ಕಿಂತ ಒಳಮಾಳಿಗೆಯ ಮೇಲೆ ಏಕೆ ಇರಲಿಲ್ಲ ಎಂದೆನ್ನಿಸತೊಡಗಿತು.





ಅಷ್ಟರಲ್ಲಿ ಆತನಿಗೆ ಮಾಳಿಗೆಯ ಒಂದು ಮೂಲೆಯಲ್ಲಿ ನೊಣ ಕುಳಿತದ್ದು ಕಾಣಿಸಿತು. ಅದು ಒಂದು ಮೂಲೆಯಿಂದ, ಮತ್ತೊಂದು ಮೂಲೆಗೆ ಹಾರುತ್ತಲಿತ್ತು. ಆಮೇಲೆ ರೆನೆನ ಕಾಲಿನ ಬೆರಳಿನ ಮೇಲೆ ಬಂದು ಕುಳಿತಿತು. ಮತ್ತೇ ಹಾರುತ್ತ ಹಾರುತ್ತ ಅವನ ತಲೆ ಮೇಲೆ ಕುಳಿತಿತು.

ರೆನೆ ಆಲೋಚಿಸತೊಡಗಿದನು. ಈ ನೊಣ ಒಂದೇ ಜಾಗದಲ್ಲಿ ಎರಡು ಸಲ ಕೂಡಬಹುದೇ ಎಂದು. ಇದೆಂತಹ ವಿಚಿತ್ರ ಆಲೋಚನೆ ಎಂದೆನ್ನಿಸಬಹುದು. ಆದರೆ ರೆನೆ ಓರ್ವ ತತ್ವಜ್ಞ. ಆದ್ದರಿಂದ ಇಂತಹ ವಿಚಿತ್ರ ವಿಚಾರಗಳು ಬರುವದು ಸಹಜ. "ನಾನು ನೊಣ ಎರಡು ಸಲ ಯಾವ ಯಾವ ಜಾಗಗಳಲ್ಲಿ ಕುಳಿತುಕೊಳ್ಳುತ್ತದೆ, ಎಂಬುದನ್ನು ನೋಂದಾಯಿಸಬೇಕು." ಅವನು ಆಲೋಚಿಸತೊಡಗಿದನು. "ಆದರೆ ಇದನ್ನು ಹೇಗೆ ಮಾಡಲಿ?"







ರೆನೆ ವಿಚಾರದಲ್ಲಿ ಬಿದ್ದನು. ಒಮ್ಮೆಲೆ ಅವನಿಗೆ ಒಂದು ಉಪಾಯ ಹೊಳೆಯಿತು. ಆ ಉಪಾಯ ಎಷ್ಟು ಚೆನ್ನಾಗಿತ್ತೆಂದರೆ ಆತ ಹಾಸಿಗೆ ಬಿಟ್ಟು ಟಣ್ಣನೆ ಜಿಗಿದು ನಿಂತನು!
ಅವನಿಗೆ ನೊಣದ ಚಲನೆಯನ್ನು ಹೇಗೆ ನೋಂದಾಯಿಸಬೇಕೆಂಬುದು ಗೊತ್ತಾಗಿತ್ತು!
ಆತ ಒಲೆಯಲ್ಲಿಯ ಇದ್ದಲಿ ತುಂಡನ್ನು ತೆಗೆದುಕೊಂಡು ಹಾಸಿಗೆಯ ಮೇಲೆ ನಿಂತು ನೊಣ ಕುಳಿತ ಜಾಗದಲ್ಲಿ ಗುರುತು ಮಾಡತೊಡಗಿದನು. ಆ ಗುರುತುಗಳನ್ನು ಜೋಡಿಸಿ ರೇಷೆಗಳನ್ನು ಬರೆದನು. (ನೀವು ಹಾಗೆ ಮಾಡಬೇಡಿ. ಅಪ್ಪ-ಅಮ್ಮ ಇವರಿಗೆ ಸೇರಲಿಕ್ಕಿಲ್ಲ!)

ಮೊದಲು ಉತ್ತರದ ಗೋಡೆಯಿಂದ ದಕ್ಷಿಣದ ಗೋಡೆವರೆಗೆ ರೇಷೆ ಬರೆದನು.



ಆ ಮೇಲೆ ಒಂದು ಬದಿಯಿಂದ ಮತ್ತೊಂದು ಬದಿಯವರೆಗೆ ರೇಷೆ ತೆಗೆದನು. ಅಲ್ಲಿ ರೇಷೆಗಳ ಗ್ರಿಡ್ ತಯಾರಾಗತೊಡಗಿತು.



ಆ ರೇಷೆಗಳ ಕ್ರಮಾಂಕವನ್ನು ಗೋಡೆಯ ಮೇಲೆ ಬರೆದನು. ಇದಾದ ಮೇಲೆ ಮರಳಿ ಹಾಸಿಗೆಯ ಮೇಲೆ ಮಲಗಿಕೊಂಡನು.



ರೆನೆ ಒಳಮಾಳಿಗೆ ಮೇಲೆ ಕುಳಿತ ನೊಣವನ್ನು ನೋಡತೊಡಗಿದನು. ಅದು ಹಾರುತ್ತ ಮತ್ತೊಂದು ಜಾಗದಲ್ಲಿ ಅಡ್ಡ ಹೋದಾಗ ಅದು ಹೋದ ರೇಷೆಗಳನ್ನು ಎಣಿಸಿ ಬರೆದಿಟ್ಟನುಃ 2

ಮತ್ತೇ ನೊಣ ಅದೇ ಜಾಗಕ್ಕೆ ಬಂದಾಗಿನ ಉದ್ದ ರೇಷೆಗಳನ್ನು ಎಣಿಸಿದನುಃ 5

ಈ ಎರಡು ಸಂಖ್ಯೆಗಳಿಂದ – 2 ಮತ್ತು 5 – ಆತನು ನೊಣ ಎಲ್ಲಿತ್ತು ಎಂಬುದು ಅವನಿಗೆ ಗೊತ್ತಾಯಿತು.

ಈ 2 ಮತ್ತು 5  ಸಂಖ್ಯೆಗಳಿಗೆ ಕೋಆರ್ಡಿನೇಟ್ಸ (coordinates) ಎಂದು ಕರೆಯುವರು. 2 ಈ ಸಂಖ್ಯೆ ಎಡಗೋಡೆಯಿಂದ ಎಷ್ಟು ದೂರದಲ್ಲಿದೆ ಎಂದು ತಿಳಿಸುವದು. 5 ಈ ಸಂಖ್ಯೆ ಗೋಡೆಯ ಕೆಳತುದಿಯಿಂದ ಎಷ್ಟು ದೂರವಿದೆ ಎಂಬುದನ್ನು ತಿಳಿಸುವದು.








ರೆನೆ ಇಡೀ ಮುಂಜಾವು ನೊಣವನ್ನು ನೋಡುತ್ತ ಕಳೆದನು.
.... ಅದರಂತೆಯೇ ಸೀನುತ್ತ...
ನೀವು ಅವನನ್ನು ಭೇಟಿ ಮಾಡಿದರೆ ಆತನು ಹೀಗೆ
ಹೇಳಬಹುದುಃ ನೊಣ ಆರು ಅಡ್ಡ, ಮೂರು ಮೇಲೆ **(6,3)**







ಇಲ್ಲವೆ ನೊಣ ನಾಲ್ಕು ಅಡ್ಡ, ಏಳು ಮೇಲೆ (4,7)
ಇಲ್ಲವೆ ನೊಣ ಎಂಟು ಅಡ್ಡ, ಒಂದು ಮೇಲೆ (8,1)






ಮಾಳಿಗೆಯ ಪ್ರತಿ ಜಾಗವನ್ನು ಕೇವಲ ಒಂದು ಜೋಡಿ ಕೋಆರ್ಡಿನೇಟ್ಸದಿಂದ ಸಹಜವಾಗಿ ಗುರುತಿಸಬಹುದು!
ರೆನೆ ನೊಣ ಕುಳಿತ ಜಾಗದ ಕೋಆರ್ಡಿನೇಟ್ಸಗಳನ್ನು ಮತ್ತೇ ಮತ್ತೇ ಗುರುತಿಸತೊಡಗಿದನು. ಹೀಗೆ ಮಾಡುತ್ತಿರುವಾಗ ಅವನಿಗೆ ಫಕ್ಕನೆ ಒಂದು ವಿಚಾರ ಹೊಳೆಯಿತು.
ನೊಣ ಹಾರುತ್ತ ಕೂಡುವ ಜಾಗವನ್ನು ಗುರುತಿಸಿದಂತೆ ಉಳಿದ ವಸ್ತುಗಳನ್ನಿಟ್ಟ ಜಾಗವನ್ನು ಕೂಡ ನಾವು ನಿರ್ಧರಿಸಬಹುದು! ಹೀಗೆ ಮಾಡುವದರಿಂದ ನನ್ನ ಹ್ಯಾಟು ಎಲ್ಲಿದೆ ಎಂಬುದು ತಕ್ಷಣವೇ ಗೊತ್ತಾಗಿ ಬಿಡುವದು. ಏಕೆಂದರೆ ನೊಣದಂತೆ ಹ್ಯಾಟು ಹಾರಾಡಲಾರದು!



ರೆನೆ ಹಾಸಿಗೆಯಿಂದ ಜಿಗಿದು ನಿಂತನು. ನೆಲದ ಮೇಲಿನ ವಸ್ತುಗಳನ್ನೆಲ್ಲ ಅಡಿಗೆ ಮನೆಯಲ್ಲಿ ನೂಕಿದನು. ಈಗ ಮಲಗುವ ಕೋಣೆಯ ನೆಲ ಮಾಳಿಗೆಯಂತೆ ಸ್ವಚ್ಛ ಕಾಣತೊಡಗಿತು. ಆದರೆ ಮಾಳಿಗೆಯ ಮೇಲೆ ಬರೆದಂತೆ ಇದ್ದಲಿಯಿಂದ ಗ್ರಿಡ್ ದ ರೇಷೆಗಳನ್ನು ಬರೆಯಲು ಸಾಧ್ಯವಿಲ್ಲ. ಇದ್ದಲಿನಿಂದ ಬರೆದ ರೇಷೆಗಳು ಕೂಡಲೇ ಅಳಿಸಿ ಹೋಗುವವು.

ರೆನೆ ನೆರೆಮನೆಯವರ ಹತ್ತಿರ ಬಣ್ಣಗಳಿವೆಯೇ ಎಂದು ಕೇಳಲು ಹೋದನು. ಓಹ್, ನೆರೆಮನೆಯವರು ಬಣ್ಣಗಾರರೇ!

ರೆನೆ ಮತ್ತು ಬಣ್ಣಗಾರ ಕೂಡಿ ನೆಲದ ತುಂಬ
ಚಚ್ಚೌಕಾಗಿ ಗ್ರಿಡ್ ದ ಸಾಲುಗಳನ್ನು ಬರೆದರು.

ಆ ಮೇಲೆ ಅವರು ಬೇಕರಿಗೆ ಹೋಗಿ ಬ್ರೆಡ್

ನ್ನು ಕೊಂಡುತರಲು ಹೋದರು.

ಅವರು ತಿರುಗಿ ಬಂದಾಗ ನೆಲದ ಮೇಲಿನ ಬಣ್ಣ ಒಣಗಿತ್ತು. ಬಣ್ಣಗಾರನು ಅಡಿಗೆ ಮನೆಯಲ್ಲಿಯ ವಸ್ತುಗಳನ್ನು ಕೋಣೆಯಲ್ಲಿಯ ಗ್ರಿಡ್ ದ ಮೇಲೆ ತಂದಿಡಲು ಸಹಾಯ ಮಾಡಿದನು.



ಅವರು ರೆನೆಯ ಹ್ಯಾಟನ್ನು, ಅವನ ಗ್ರಹ-ತಾರೆಗಳ ಪುಸ್ತಕವನ್ನು, ಅವನ ಪೆನ್ನನ್ನು, ಅವನ ಹಳೆಯ ಶೂಗಳನ್ನು, ಅವನ ಚಿಕ್ಕಂದಿನಲ್ಲಿ ಬರೆದ ನೋಟಬುಕ್ ನ್ನು ಕೋಣೆಯಲ್ಲಿ ಕಲೆಹಾಕಿದರು. ಎಷ್ಟೋ ವಸ್ತುಗಳ ಬಗ್ಗೆ ರೆನೆಗೂ ಕೂಡ ಪರಿಚಯವಿರಲಿಲ್ಲ. ರೇಖಾಪಟದ ಮೇಲೆ ಅಲ್ಲಿಟ್ಟ ಎಲ್ಲ ವಸ್ತುಗಳ ಕೋಆರ್ಡಿನೇಟ್ಸ ಗಳ ಬಗ್ಗೆ ನೋಂದು ಮಾಡಿದನು.

ಬಹು ಚೆಂದವಾಗಿದೆ!

BOOTS 4,4
STAR BOOK 4,5
CACTUS 3,8
HAT 6,7
JOURNAL 3,
BAGEL
AEOLIPILE 6,4
CHAMBER POT 5,2
INK 1,6
CANDLE
CHEESE

ಇದಾದ ಮೇಲೆ ಅವನ ಮನೆ ಸ್ವಚ್ಛವಾಗಿ
ಕಾಣಿಸತೊಡಗಿತು.
ಅದು ಇನ್ನೆಂದಿಗೂ ಹೊಲಸಾಗಲಿಕ್ಕಿಲ್ಲ.






ರೆನೆ ಪದ್ಧತಿಯು ಜಗತ್ತಿನಲ್ಲಿ ಎಲ್ಲ ಕಡೆ ಜನಪ್ರಿಯವಾಗತೊಡಗಿತು, ಇದಕ್ಕೆ ಕಾರ್ಟೆಜಿಯನ್ ಕೋಆರ್ಡಿನೇಟ ಪದ್ಧತಿ  ಎಂದು ಕೂಡ ಕರೆಯುತ್ತಾರೆ. (ಕಾರ್ಟೇಜಿಯನ್ ಇದು ರೆನೆಯ ಅಡ್ಡ ಹೆಸರು, ದೇಕಾರ್ತದ ಮೇಲಿಂದ ತೆಗೆದುಕೊಳ್ಳಲಾಗಿದೆ.)





# ಒಳಮಾಳಿಗೆಯ ಮೇಲೆ ನೊಣ

## ಗಣಿತದ ಕಟ್ಟು ಕತೆ

ರೆನೆ ದೇಕಾರ್ತ:  ದೊಡ್ಡ ವಿಚಾರವಂತ.

ಆದರೆ ಆತ ಬಹು ಗೊಂದಲಕ್ಕೆ ಈಡಾಗುತ್ತಿದ್ದನು.

ಅಷ್ಟೇ ಅಲ್ಲ ಅವನ ಇಡೀ ಮನೆಯೇ ಗೊಂದಲಕ್ಕೀಡಾಗಿದಂತಿದೆ.

ಅವನಿಗೆ ಒಂದೆಡೆ ಇಟ್ಟ ವಸ್ತುಗಳು ದೊರೆಯಲೊಲ್ಲವು. ಅವನ ಸಮಸ್ಸೆಗೆ ಪರಿಹಾರ...

ನೊಣದ ಒಳಮಾಳಿಗೆಯ ಮೇಲಿನ ಅಲೆದಾಟ,

ರೆನೆನ ಈ ರೋಮಾಂಚಕ ಕತೆಯನ್ನು ಓದಿ ನೋಡಿ. ಕೆಲ ಸಲ ನಕ್ಕರೂ  ಇದು ಒಂದು ನಿಜವಾದ ಕತೆ!

### ಲೇಖಿಕೆಯ ಟಿಪ್ಪಣಿ:

ನಾವು ತಿಳಿದಷ್ಟು ರೆನೆಯ ಕೋಣೆ ಅಷ್ಟೊಂದು ಹೊಲಸು ಇರಲಿಕ್ಕಿಲ್ಲ. ಆತ ಸೀನ ನದಿಯಲ್ಲಿ ಬಿದ್ದಿರಲಿಕ್ಕಿಲ್ಲ. ಇಲ್ಲವೆ ಒಳಮಾಳಿಗೆಯ ಮೇಲೆ ರೇಷೆ ಬರೆದಿರಲಿಕ್ಕಿಲ್ಲ. ಇದೆಲ್ಲ ಆತ ಹೇಗೆ ಮಾಡಿದನು ಎಂಬುದರ ಬಗ್ಗೆ ಯಾರಿಗೂ ತಿಳಿಯದು. ಆದರೆ ರೆನೆಯ ಕೋಆರ್ಡಿನೇಟ ಪದ್ಧತಿಯು ಬಹು ಜನಪ್ರಿಯ ವಾಯಿತು.
ಆತನು ನಿಜವಾಗಿಯೂ ಓರ್ವ ಒಳ್ಳೆಯ ತತ್ವಜ್ಞ.